# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 762

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ. ಕವಟಗಿಮಠ. ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 15.12.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪಡಿತರ ವಿತ್ತರಣಾ ವ್ಯವಸ್ಥೆಯನ್ನು ಸದೃಢ ಹಾಗೂ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಜ್ಯದ ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸುತ್ತಿರುವ ಪಡಿತರ ಪದಾರ್ಥಗಳು ಸಂಪೂರ್ಣವಾಗಿ ಫಲಾನುಭವಿಗಳಿಗೆ ತಲುಪಿಸುವ ವ್ಯವಸ್ಥೆಯಲ್ಲಿ ಈ ಕೆಳಕಂಡಂತೆ ಹಲವಾರು ಸುಧಾರಣೆಗಳನ್ನು ಜಾರಿಗೆ ತರಲಾಗಿದೆ.<br>1. ರಾಜ್ಯದ ಎಲ್ಲಾ ಪಡಿತರ ಚೀಟಿಗಳು ಮತ್ತು ಫಲಾನುಭವಿಗಳನ್ನು ಅವರ ಆಧಾರ್ ನೊಂದಿಗೆ ಜೋಡಣೆ ಮಾಡಲಾಗಿರುತ್ತದೆ.<br>2. ಪ್ರತಿ ಮಾಹೆ ಪಡಿತರ ಪದಾರ್ಥಗಳನ್ನು ನೇರವಾಗಿ ಫಲಾನುಭವಿಗಳಿಗೆ ತಲುಪಿಸಲು ಬಯೋಮೆಟ್ರಿಕ್ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ.<br>3. ಎಲ್ಲಾ ನ್ಯಾಯಬೆಲೆ ಅಂಗಡಿಗಳಲ್ಲಿ ಪಿ.ಓ.ಎಸ್ ವ್ಯವಸ್ಥೆ ಜಾರಿಗೊಳಿಸಿದ್ದು, ನೈಜ ಫಲಾನುಭವಿಗೆ ಬಯೋಮೆಟ್ರಿಕ್ ಮೂಲಕ ಪಾರದರ್ಶಕವಾಗಿ, ಪಡಿತರ ವಿತರಣೆಯಾಗುವುದನ್ನು ಖಾತರಿಪಡಿಸಲಾಗುತ್ತದೆ.<br>4. ಪಡಿತರ ಪದಾರ್ಥಗಳನ್ನು ಸಗಟು ಮಳಿಗೆಗಳಲ್ಲಿ ದಾಸ್ತಾನಿರಿಸುವುದು ಹಾಗೂ ನ್ಯಾಯಬೆಲೆ ಅಂಗಡಿಗಳಿಗೆ ಬಿಲ್ಲಿಂಗ್ ಮಾಡುವ ವ್ಯವಸ್ಥೆಯನ್ನು ಕೂಡ ಸಂಪೂರ್ಣ ಗಣಕೀಕರಣಗೊಳಿಸಿ ಆನ್‌ಲೈನ್ ವ್ಯವಸ್ಥೆ ಜಾರಿಯಲ್ಲಿದೆ.<br>5. ಪಡಿತರ ವ್ಯವಸ್ಥೆಯಲ್ಲಿ ಪಾರದರ್ಶಕತೆಯನ್ನು ಜಾರಿಗೆ ತರುವುದರೊಂದಿಗೆ ಫಲಾನುಭವಿಗಳ ಕುಂದುಕೊರತೆ ನಿವಾರಣಾ ವ್ಯವಸ್ಥೆಯನ್ನು ಕೂಡ ಜಾರಿಗೆ ತರಲು ಆಹಾರ ಅದಾಲತ್, ಜಾಗೃತ ಸಮಿತಿಗಳು, ಸಹಾಯವಾಣಿ, ಪಂಚಿಕೆ ಬಗ್ಗೆ ಪಡಿತರ ಚೀಟಿದಾರರಿಗೆ ಎಸ್.ಎಂ.ಎಸ್ ರವಾನೆ ಇತ್ಯಾದಿ ಕ್ರಮಗಳೂ ಕೂಡ ಜಾರಿಯಲ್ಲಿವೆ.<br>ಮೇಲಿನ ಎಲ್ಲಾ ಸುಧಾರಣೆಗಳಂತೆ ನ್ಯಾಯಬೆಲೆ ಅಂಗಡಿಗಳಲ್ಲಿ ಪಿ.ಓ.ಎಸ್ ವ್ಯವಸ್ಥೆಯಲ್ಲಿ ಪಡಿತರ ಚೀಟಿದಾರರಿಗೆ ಆಧಾರ್ ಬಯೋಮೆಟ್ರಿಕ್ ಮುಖಾಂತರ ವಿತರಣೆ ಮಾಡಲಾಗುತ್ತಿದ್ದು, ನ್ಯಾಯಬೆಲೆ ಅಂಗಡಿ ಮಾಲೀಕರು ಸರ್ಕಾರಕ್ಕೆ ತಪ್ಪು ಲೆಕ್ಕವನ್ನು ತೋರಿಸಲು ಅವಕಾಶವಿರುವುದಿಲ್ಲ. ಹಾಗೂ ನ್ಯಾಯಬೆಲೆ ಅಂಗಡಿಯಲ್ಲಿ ಉಳಿಕೆಯಾಗುವ ಪದಾರ್ಥವನ್ನು ಲೆಕ್ಕಕ್ಕೆ ತೆಗೆದುಕೊಂಡು ಮುಂದಿನ ಮಾಹೆಯ ನ್ಯಾಯಬೆಲೆ ಅಂಗಡಿ ಹಂಚಿಕೆಯಲ್ಲಿ ಆರಂಭಿಕ ದಾಸ್ತಾನಾಗಿ ಕಡಿತಗೊಳಿಸಲಾಗುತ್ತದೆ. |

| | | |
|---|---|---|
| | | ಈ ಮೂಲಕ ಪಡಿತರ ವ್ಯವಸ್ಥೆಯಲ್ಲಿ ಮಾರ್ಗಾಂತರ ಮತ್ತು ಕಾಳಸಂತೆ ಪ್ರಕರಣಗಳನ್ನು ತಡೆಗಟ್ಟಲು ಹಲವಾರು ಸುಧಾರಣೆಗಳನ್ನು ಜಾರಿಗೊಳಿಸಲಾಗಿದೆ. |
| ಆ | ರಾಜ್ಯದಲ್ಲಿ ಒಟ್ಟು ಪಡಿತರ ಕಾರ್ಡುದಾರರಲ್ಲಿ ಬಿ.ಪಿ.ಎಲ್ ಕಾರ್ಡು ಹೊಂದಿದವರ ಸಂಖ್ಯೆ ಹಾಗೂ ಎ.ಪಿ.ಎಲ್ ಕಾರ್ಡು ಹೊಂದಿದವರ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ 10,92,605 ಅಂತ್ಯೋದಯ ಪಡಿತರ ಚೀಟಿಗಳು, 11700823 ಆದ್ಯತಾ ಪಡಿತರ ಚೀಟಿಗಳು ಹಾಗೂ 2104815 ಎಪಿಎಲ್ ಪಡಿತರ ಚೀಟಿಗಳಿರುತ್ತದೆ. (ಜಿಲ್ಲಾವಾರು ಮಾಹಿತಿ ಅನುಬಂಧದಲ್ಲಿ ಲಗತ್ತಿಸಿದೆ) |
| ಇ | ಬಿ.ಪಿ.ಎಲ್ ಕಾರ್ಡುದಾರರಿಗೆ ನೀಡುವ ಪಡಿತರ ವಿವರ ನೀಡುವುದು; | ಪ್ರತಿ ಮಾಹೆ ಪ್ರತಿ ಅಂತ್ಯೋದಯ (ಎಎವೈ) ಪಡಿತರ ಚೀಟಿಗಳಿಗೆ 35 ಕೆ.ಜಿ. ಅಕ್ಕಿಯನ್ನು, ಪ್ರತಿ ಆದ್ಯತಾ (ಬಿಪಿಎಲ್) ಫಲಾನುಭವಿಗೆ 5 ಕೆ.ಜಿ. ಅಕ್ಕಿ ಹಾಗೂ ಪ್ರತಿ ಆದ್ಯತಾ (ಬಿಪಿಎಲ್) ಪಡಿತರ ಚೀಟಿಗೆ 2 ಕೆ.ಜಿ ಗೋಧಿ ವಿತರಿಸಲಾಗುತ್ತಿದೆ. |
| ಈ | ಪಲವು ಜಿಲ್ಲೆಗಳಲ್ಲಿ ಅಪಾರ ಪ್ರಮಾಣದ ಪಡಿತರವು ವಿತರಣೆಯಾಗದೇ ಉಳಿಯುತ್ತಿದ್ದು, ಅದನ್ನು ಸರ್ಕಾರ ಯಾವ ರೀತಿ ಉಪಯೋಗ ಮಾಡುತ್ತಿದೆ; | ಪ್ರತಿ ಮಾಹೆಯ ಅಂತ್ಯಕ್ಕೆ ಸಗಟು ಗೋದಾಮು ಹಾಗೂ ನ್ಯಾಯಬೆಲೆ ಅಂಗಡಿಗಳಲ್ಲಿ ಉಳಿಕೆಯಾಗುವ ಆಹಾರ ಧಾನ್ಯಗಳ ಪ್ರಮಾಣವನ್ನು ಅಂತಿಮ ಶಿಲ್ಕಾಗಿ ಪರಿಗಣಿಸಿ ಮುಂದಿನ ತಿಂಗಳ ಹಂಚಿಕೆಯನ್ನು ನೀಡಲಾಗುತ್ತದೆ. |
| ಉ | ಪ್ರಸಕ್ತ ಸಾಲಿನಲ್ಲಿ ಎಷ್ಟು ನಕಲಿ ಪಡಿತರ ಚೀಟಿಗಳನ್ನು ಗುರುತಿಸಲಾಗಿದೆ; | ಆಧಾರ ಜೋಡಣೆಯೊಂದಿಗೆ ಪಡಿತರ ಚೀಟಿಗಳನ್ನು ವಿತರಣೆ ಮಾಡುತ್ತಿರುವುದರಿಂದ ಯಾವುದೇ ನಕಲಿ ಪಡಿತರ ಚೀಟಿಗೆ ವಿತರಣೆಯಾಗಿರುವುದಿಲ್ಲ. ಆದರೆ 2019-20ನೇ ಸಾಲಿಗೆ ಸಂಬಂಧಿಸಿದಂತೆ ಸರ್ಕಾರ ನಿಗಧಿಪಡಿಸಿರುವ ಮಾನದಂಡಗಳನ್ನು ಹೊರತುಪಡಿಸಿ ಪಡೆದಿರುವ ಒಟ್ಟು 1049229 ಅನರ್ಹ ಪಡಿತರ ಚೀಟಿಗಳನ್ನು ಗುರುತಿಸಿ ರದ್ದುಪಡಿಸಲಾಗಿರುತ್ತದೆ. |
| ಊ | ಕೇಂದ್ರ ಸರ್ಕಾರವ ಒಂದು ರಾಷ್ಟ್ರ ಒಂದು ಪಡಿತರ ಯೋಜನೆಯನ್ನು ಘೋಷಿಸಿದ್ದು, ಇದರ ಅನುಷ್ಠಾನಕ್ಕೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ರಾಜ್ಯದಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯ ಫಲಾನುಭವಿಗಳನ್ನು ಅವರವರ ಆಧಾರನೊಂದಿಗೆ ಸಂಪೂರ್ಣವಾಗಿ ಜೋಡಣೆ ಮಾಡಲಾಗಿದ್ದು, ಕೇಂದ್ರದ "ಒಂದು ರಾಷ್ಟ್ರ ಒಂದು ಪಡಿತರ" ಯೋಜನೆಯನ್ನು ಈಗಾಗಲೇ ಜಾರಿಗೆ ತರಲಾಗಿದೆ. ರಾಜ್ಯದಲ್ಲಿನ ಫಲಾನುಭವಿಗಳು ರಾಜ್ಯದ ಯಾವುದೇ ಪ್ರದೇಶದಲ್ಲಿ ಹಾಗೂ ಬೇರೆಯಾವುದೇ ರಾಜ್ಯದಲ್ಲಿ ಅವರ ಪ್ರತಿ ಮಾಹೆಯ ಪಡಿತರ ಹಂಚಿಕೆಯನ್ನು ಪಡೆದುಕೊಳ್ಳಲು ಹಾಗೂ ಇತರೆ ರಾಜ್ಯಗಳ ಪಡಿತರ ಫಲಾನುಭವಿಗಳು ರಾಜ್ಯದಲ್ಲಿನ ಯಾವುದೇ ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರವನ್ನು ಪಡೆಯುವ ವ್ಯವಸ್ಥೆ ಜಾರಿಗೊಳಿಸಲಾಗಿದೆ. |

ಆನಾಸ 339 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

## Annexure to LAQ 762

| Sl.No. | District | AAY | PHH | NPHH | TOTAL |
|---|---|---|---|---|---|
| 1 | Bagalkote | 46161 | 368267 | 54916 | 469344 |
| 2 | Ballari | 66634 | 531302 | 59130 | 657066 |
| 3 | Bengaluru East | 2592 | 72129 | 81175 | 155896 |
| 4 | Bengaluru North | 2725 | 109671 | 60996 | 173392 |
| 5 | Bangaluru South | 5815 | 109710 | 68536 | 184061 |
| 6 | Bangaluru West | 4650 | 184648 | 96468 | 285766 |
| 7 | Belagavi | 68566 | 1075103 | 296497 | 1440166 |
| 8 | Bengaluru | 13078 | 500867 | 77273 | 591218 |
| 9 | Bengaluru Rural | 14515 | 217843 | 16123 | 248481 |
| 10 | Bidar | 39940 | 311078 | 42504 | 393522 |
| 11 | Chamrajanagara | 35804 | 256222 | 11507 | 303533 |
| | Chikkaballapura | 28601 | 281471 | 12401 | 322473 |
| 12 | Chikkamagaluru | 22393 | 245609 | 55282 | 323284 |
| 13 | Chitradurga | 42408 | 365085 | 28461 | 435954 |
| 14 | Dakshina Kannada | 23242 | 251704 | 153958 | 428904 |
| 15 | Davangere | 45591 | 336044 | 34226 | 415861 |
| 16 | Dharwar | 29871 | 356024 | 84156 | 470051 |
| 17 | Gadag | 28425 | 226255 | 33696 | 288376 |
| 18 | Hassan | 23497 | 429720 | 33559 | 486776 |
| 19 | Haveri | 47115 | 342999 | 49697 | 439811 |
| 20 | Kalaburagi | 63551 | 492547 | 94941 | 651039 |
| 21 | Kodagu | 10139 | 100055 | 31246 | 141440 |
| 22 | Kolar | 30018 | 314630 | 27558 | 372206 |
| 23 | Koppal | 37554 | 293228 | 15726 | 346508 |
| 24 | Mandya | 34585 | 450782 | 48277 | 533644 |
| 25 | Mysuru | 50288 | 661656 | 95436 | 807380 |
| 26 | Raichur | 53087 | 406482 | 27106 | 486675 |
| 27 | Ramanagara | 19096 | 281171 | 10622 | 310889 |
| 28 | Shivamogga | 37802 | 357027 | 92598 | 487427 |
| 29 | Tumkuru | 49460 | 613835 | 53736 | 717031 |
| 30 | Udupi | 28598 | 165113 | 101277 | 294988 |
| 31 | UttaraKannada | 16257 | 293798 | 82704 | 392759 |
| 32 | Vijayapura | 41192 | 463439 | 62660 | 567291 |
| | Yadgir | 29355 | 235309 | 10367 | 275031 |
| | | 1092605 | 11700823 | 2104815 | 14898243 |